ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ, ದಿನಾಂಕ: 18ನೇ ಜುಲೈ, 2019

ಹೈ-ಟೆನ್ಷನ್ ವಿದ್ಯುತ್ ತಂತಿ ಮಾರ್ಗದಲ್ಲಿನ ಅವಘಡಗಳ ಬಗ್ಗೆ

ಶ್ರೀ ಎಂ.ಪಿ. ಸುನೀಲ್ ಸುಬ್ರಮಣಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

342 (362) ಮಾನ್ಯ ಮುಖ್ಯಮಂತ್ರಿಯವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ನಗರದಲ್ಲಿ ಹೈ-ಟೆನ್ಷನ್ ವಿದ್ಯುತ್ ತಂತಿ ಮಾರ್ಗ ಹಾದು ಹೋಗಿರುವ ಒಟ್ಟು ಉದ್ದ ಎಷ್ಟು ; ಈ ಹೈ-ಟೆನ್ಷನ್ ವಿದ್ಯುತ್ ತಂತಿ ಹಾದು ಹೋಗಿರುವ ಭೂಮಿಯು ಯಾರ ಒಡೆತನದ್ದಾಗಿರುತ್ತದೆ ; (ವಿವರ ನೀಡುವುದು)

(ಆ) ಹೈ-ಟೆನ್ಷನ್ ವಿದ್ಯುತ್ ತಂತಿಗಳನ್ನು ಅಳವಡಿಸುವ ಸಂದರ್ಭದಲ್ಲಿ ಅಲ್ಲಿನ ಭೂಮಾಲೀಕರಿಗೆ ಪರಹಾರವನ್ನು ನೀಡಲಾಗುವುದೆ; ಇದ್ದಲ್ಲಿ, ಪರಿಹಾರದ ಮೊತ್ತ ನೀಡಿದ ನಂತರ ಭೂಮಿಯನ್ನು ಇಂಧನ ಇಲಾಖೆಯು ತನ್ನ ವಶಕ್ಕೆ ಪಡೆಯದಿರಲು ಕಾರಣವೇನು;

(ಇ) ಹೈ-ಟೆನ್ಷನ್ ವಿದ್ಯುತ್ ತಂತಿಗಳನ್ನು ಅಳವಡಿಸುವ ಸಂದರ್ಭದಲ್ಲಿ ಭೂಮಿ ಪಡೆಯಲು ಅನುಸರಿಸುವ ಮಾನದಂಡಗಳೇನು ;(ವಿವರ ನೀಡುವುದು)

(ಈ) ಬೆಂಗಳೂರು ನಗರದಲ್ಲಿ ನಿಯಮ ಮೀರಿ ಹೈ-ಟೆನ್ಷನ್ ವಿದ್ಯುತ್ ತಂತಿ ಕೆಳಗೆ ಕಟ್ಟಿರುವ ಕಟ್ಟಡಗಳನ್ನು ತೆರವುಗೊಳಿಸಲು ಬೆಂಗಳೂರು ಮಹಾನಗರ ಪಾಲಿಕೆಯ ಗಮನಕ್ಕೆ ಇಲಾಖೆಯು ಪತ್ರ ವ್ಯವಹಾರ ಅಥವಾ ಸಭೆ ನಡೆಸಲಾಗಿದೆಯೇ ? (ವಿವರ ನೀಡುವುದು)